ಜೆ.ಟಿ. ಜಯರಾಮಯ್ಯ* ಮತ್ತು ಕೆ. ಕುಮಾರ್ ಯಾದವ್**

# ಮುಮ್ಮಡಿ ಬಲ್ಲಾಳನ ತೆಂಕನಹಳ್ಳಿದೊಡ್ಡಿಯ ಶಿಲಾಶಾಸನ

ತೆಂಕನಹಳ್ಳಿದೊಡ್ಡಿಯು ಬೆಂಗಳೂರು ಗ್ರಾಮಾಂತರ ಜಿಲ್ಲೆ ಚನ್ನಪಟ್ಟಣ ತಾಲೂಕಿನ ಒಂದು ಗ್ರಾಮ. ಪ್ರಸ್ತುತ ಶಾಸನವು ತೆಂಕನಹಳ್ಳಿದೊಡ್ಡಿಯ ಸಂಬೇಗೌಡ ಎಂಬುವರ ಹೊಲದಲ್ಲಿದೆ. ಈ ಶಿಲಾ ಶಾಸನದ ಎದುರು ಪಾಳುಬಿದ್ದ ಮಾರಿಗುಡಿ ಇದೆ. ಗುಡಿಯಲ್ಲಿ ಯಾವುದೇ ದೇವರ ಮೂರ್ತಿಯಿಲ್ಲ.

ಕನ್ನಡ ಭಾಷೆ ಹಾಗೂ ಕನ್ನಡ ಲಿಪಿಯಲ್ಲಿರುವ ಈ ಶಾಸನವು ೫೨ ಇಂಚು ಎತ್ತರ ೨೭ ಇಂಚು ಅಗಲವಾಗಿದೆ. ಒಟ್ಟು ೨೭ ಸಾಲುಗಳಿಂದ ಕೂಡಿದ ದಾನ ಶಾಸನವಾಗಿದ್ದು ಅಲ್ಲಲ್ಲಿ ತ್ರುಟಿತವಾಗಿದೆ. ಭಾಷೆ ಮತ್ತು ಲಿಪಿ ಹೊಯ್ಸಳರ ಕಾಲದ್ದಾಗಿದ್ದು ಶಾಸನ ಪೂರ್ಣವಾಗಿದೆ.

### ಶಾಸನ ಪಾಠ

೧ ಸಮಸ್ತ ವಿಸ್ತ್ರುತ ವಿಸ್ತಾರ ಪ್ರಶಸ್ತಿ ಸಹಿತಂ
೨ ಶ್ರೀಮತು ಪ್ರತಾಪ ಚಕ್ರವರ್ತಿ ಹೊಇಸಣ ಶ್ರೀ ವೀ.
೩ ಬಲ್ಲಾಳ ದೇವರಸರು ವಿರುಪಾಕ್ಷ ಪಟ್ಟಣದೊ
೪ ಳು ಸುಖ ಸಂಕಥಾ ವಿನೋದದಿಂ ರಾಜ್ಯಂಗೆಯುತ್ತಿರೆ
೫ ಕಲಿಮು ಶಕ ವರುಷ ೧೨೬೦ನೆಯ ಇಸ್ವರ ಸಂ
೬ ವತ್ಸರದ ಆಶ್ವಇಜ ಸು ೩ ವಡ್ಡವಾರದಾದು ಶ್ರೀ
೭ ಮನುಮಹಾ ಸಾಮಂತಾದಿ ಪತಿ ಮಾರಿಸೆಟ್ಟಿ
೮ ಯ ಗೂಳೆಯ ನಾಯಕರವರು ಶ್ರೀಮನುಮ
೯ ಹಾ ವಡ ಬ್ಯವಹಾರಿ ಉಭಯ ನಾನಾ ದೇಶಿಮುಲೆ
೧೦ ಯಾಳ ಮುಖ್ಯರಪ ನಿಲಪಸೆಟ್ಟಿಯರ ಮಕಳು ರಾ
೧೧ ಯಪ ಸೆಟ್ಟಿಯರಿಗೆ ಲಂಕೆರೆಯ ಸ್ಥಳದೊಳಗಣ
೧೨ ನವರಾದಿಯಾ.... ಹಳಿಯ ಚುತುಸೀಮೆ ಇಂ
೧೩ ದೊಳಗುಳ್ಳ ಗದ್ದೆ ಬೆದ್ದಲು ಆ ಲಂಕೆರೆಯಾ ಹಿರಿ

* ಉಪನ್ಯಾಸಕರು, ವಿವೇಕಾನಂದ ಪದವಿಪೂರ್ವ ಕಾಲೇಜು, ರಾಜಾಜಿನಗರ, ಬೆಂಗಳೂರು-೫೬೦ ೦೧೦
** ನಂ. ೨೫, ಕಾವಲ್ ಭೈರಸಂದ್ರ, ಆರ್. ಟಿ. ನಗರ ಅಂಚೆ, ಬೆಂಗಳೂರು-೫೬೦ ೦೩೨

೧೪ ಯಾ ಕೆಳಗೆ ಪೂರ್ವ ಮರಿಯಾದೆಯಲಿ
೧೫ ನವರಾದಿಯ ಹಳಿಗೆ ಸಲುವ ಗದ್ದೆ ಸಲಿಗೆ....
೧೬ ನೊಳಗಣ ಭೂಮಿಯೊಳಗಣ ನಿಧಿ ನಿಕ್ಷೇಪ ಜ
೧೭ ಲ ಪಾಷಾಣ ಅನ್ತು ಆಗಾಮಿಯೊಳಗಣ ಸರ್ವ ಸ್ವಾ
೧೮ ಮ್ಯವನು ಪಾತ್ರ ಜ್ಞಾತಿ ಸಾಮಂತದಾಯ
೧೯ ....ಮತದಿಂ ಸ್ವರುಚಿ ಇಂ ದಾರಾಪೂರ್ವ
೨೦ ಕಂ ಮಾಡಿ ಆ ಗೂಳಿಯ ನಾಯಕರು
೨೧ ಆ ರಾಯಪ್ಪ ಸೆಟ್ಟಿಯ ಭೂಮಿ ಚಂದ್ರಾದಿತ್ಯರುಳಂ ನಂಬರಂ
೨೨ ಕೊಡುಗೆಯಾಗಿ ಸಲುವಂತಾಗಿ ಕೊಟ್ಟ ಶಿಲಾಶಾಸ
೨೩ ನ ಇ ಧರ್ಮನಂ ಆವನಳುಪಿದವನು ಅಶ್ವೇತಿ ಬ್ರಹ್ಮೇತಿ
೨೪ ಯೊಳಾಗ್ರ ಪಂಚ ಮಹಾಪಾತಕವನ್ ಮಾಡಿದ [ವ]
೨೫ ರು ಹೋಹಗತಿಗೆ ಹೋಹರು ಸ್ವದತ್ತಂ ಪರದತ್ತಾಂ
೨೬ ವಾಯೋ ಹರೇತಿ ವಸುಂಧರಾ ಷಷ್ಟಿರ್ ವರುಷ ಸಹಸ್ರಾಣಿ
೨೭ ಜಾಯೇತಿ ಜಾಯೇ ಕ್ರಿಮಿಃ

ಶಕ ವರುಷ ೧೨೬೦ನೆಯ ಈಶ್ವರ ಸಂವತ್ಸರದ ಆಶ್ವಯುಜ ಶು ೩ ವಡ್ಡವಾರ ಎಂದು ಕಾಲವನ್ನು ಗಣನೆ ಮಾಡಿಕೊಂಡಿದೆ. ಈ ಶಾಸನ ಕ್ರಿ. ಶ.೧೩೩೮ರ ಸೆಪ್ಟೆಂಬರ್ ೨೭ನೇ ತಾರೀಖಿಗೆ ಸರಿಹೊಂದುತ್ತದೆ. ಈ ಕಾಲಕ್ಕೆ ಸರಿಯಾಗಿ ಹೊಯ್ಸಳ ರಾಜ ಮೂರನೇ ಬಲ್ಲಾಳನು ರಾಜ್ಯಭಾರ ಮಾಡುತ್ತಿದ್ದ ಕಾಲವಾಗಿದೆ.

ಈ ಶಾಸನವು ವಿಜಯನಗರ ಸಾಮ್ರಾಜ್ಯದ ಸ್ಥಾಪನೆಯ ಕಾಲವನ್ನು ಮುಂದೂಡಲು ಸಹಕಾರಿ ಯಾಗಿದೆ. ಇತ್ತೀಚಿನ ಸಂಶೋಧನೆಗಳ ಪ್ರಕಾರ ಕ್ರಿ. ಶ. ೧೩೩೬ರಲ್ಲಿ ವಿಜಯನಗರ ಸಾಮ್ರಾಜ್ಯ ಸ್ಥಾಪನೆ ಯಾಗಲ್ಲಿಲ್ಲವೆಂದು, ಬಹುಶಃ ೧೩೪೬ರಲ್ಲಿ ಸ್ಥಾಪನೆ ಯಾಗಿರಬೇಕು. ಆದುದರಿಂದ ವಿಜಯನಗರ ಸ್ಥಾಪನೆಯ ಕಾಲವನ್ನು ಕ್ರಿ. ಶ. ೧೩೩೬ಕ್ಕೆ ಬದಲಾಗಿ ೧೩೪೬ಕ್ಕೆ ಮುಂದೂಡಬಹುದಾಗಿದೆ. ಆದಕ್ಕೆ ಈ ಕೆಳಕಂಡ ಅಂಶ ಗಳನ್ನು ನಾವು ಗಣನೆಗೆ ತೆಗೆದುಕೊಳ್ಳಬಹುದು. ಶೃಗೇರಿ ಕ್ರಮಾಂಕ ಒಂದರ ಶಾಸನ ಇದೇ ವರ್ಷದ್ದಾಗಿದೆ (೧೩೪೬) ಇಲ್ಲಿ ಸಂಗಮ ಸೋದರರು ಭಾರತೀತೀರ್ಥರಿಗೆ ದಾನ ಮಾಡಿದ ಶಾಸನವಿದೆ.

ಹೊಯ್ಸಳ ಬಲ್ಲಾಳನು ಮೂರು ರಾಜಧಾನಿ ಗಳನ್ನು ಮಾಡಿಕೊಂಡಿದ್ದನು. ಒಂದನೆಯದಾಗಿ ದ್ವಾರಸಮುದ್ರ, ಎರಡನೆಯದಾಗಿ ತಿರುವಣ್ಣಾಮಲೈ ಬಲ್ಲಾಳ ಪಟ್ಟಣ ಮತ್ತು ಮೂರನೆಯದಾಗಿ ವಿಜಯ ವಿರೂಪಾಕ್ಷ ಹೊಸ ಪಟ್ಟಣ. ವಿಜಯ ವಿರೂಪಾಕ್ಷ ಪಟ್ಟಣದ ಬಗ್ಗೆ ವೆಂಕಟರಮಣಯ್ಯ ಮತ್ತು ನೀಲಕಂಠ ಶಾಸ್ತ್ರಿಗಳು ಮುಮ್ಮಡಿ ಬಲ್ಲಾಳನ ಹೊಸಪಟ್ಟಣವೇ ಬೇರೆ ಬುಕ್ಕನ ರಾಜಧಾನಿ ಹೊಸಪಟ್ಟಣವೇ ಬೇರೆ ಎಂದು ಹೇಳಿರುತ್ತಾರೆ.

ಹೊಸಪಟ್ಟಣವೆಂಬುದು ಹಂಪೆ ವಿಜಯನಗರದ ಮೊದಲಿನ ಹೆಸರಾಗಿತ್ತು. ಕ್ರಿ. ಶ. ೧೩೨೦ರಲ್ಲಿಯ ಶಿಲಾಶಾಸನದಲ್ಲಿ (ಎಕ ೧೦ ಕೋ ೭೫) ಬಲ್ಲಾಳ ಪುದು ಪಡ್ಡೈವೀಡು ಎಂದರೆ ಹೊಸ ಪಟ್ಟಣದಲ್ಲಿ ಎಂದಿದೆ. ಅರಸೀಕೆರೆ (ಎಕ ೫ ಅರಸೀ ೬೬) ಶಾಸನದ ಪ್ರಕಾರ ಬಲ್ಲಾಳನು ಹೊಸ ಪಟ್ಟಣದಲ್ಲಿದ್ದ. ಗುಬ್ಬಿ (ಎಕ. ೧೨ ಗುಬ್ಬಿ ೩೦ರ) ಶಾಸನದಲ್ಲಿ ಹೊಸ ಪಟ್ಟಣದಲ್ಲಿ ಎಂದಿದೆ. ಈ ಎಲ್ಲ ಶಾಸನಗಳು ರಾಜಧಾನಿಯ ಹೆಸರನ್ನು ವಿಜಯ ವಿರೂಪಾಕ್ಷ ಹೊಸ ಪಟ್ಟಣ ಎಂದು ಹೇಳಿವೆ.

ಈ ಹೆಸರು ಹೇಗೆ ಮತ್ತು ಏಕೆ ಬಂದಿತು ಎಂಬ ಪ್ರಶ್ನೆಗೆ ಉತ್ತರ ಬಹಳ ಸುಲಭವಾಗಿದೆ. ಮೂರನೇ ಬಲ್ಲಾಳನ ಮಗನ ಹೆಸರು ನಾಲ್ವಡಿ ಬಲ್ಲಾಳ ಅಥವಾ ವೀರವಿಜಯ ಬಲ್ಲಾಳ (ಎಂ ಎ ಆರ್ ೧೯೩೮ ನಂ ೪), ವೀರ ವಿರೂಪಾಕ್ಷ ಬಲ್ಲಾಳ (ಎಕ ೬. ಚಿಕ್ಕಮ. ೧೦೫) ಹಾಗೂ ಹಂಪೊಡೆಯಾ (ಎಕ ೪ ಕೃನ ೨೯) ಹಂಪೆಯ ಒಡೆಯ ಎಂದಿವೆ. ನಾಲ್ಕನೆಯ ಬಲ್ಲಾಳನಿಗೆ ಹಂಪೆ ವಿರೂಪಾಕ್ಷನ ಹೆಸರೆ ಇದ್ದಿತು. ವಿರೂಪಾಕ್ಷ ಪಟ್ಟಣವೆಂಬುದು ಹಂಪೆಗಿದ್ದ ಇನ್ನೊಂದು ಹೆಸರು. ಇದಲ್ಲದೆ ಹಂಪೆಯ ವಿರೂಪಾಕ್ಷ ದೇವಾಲಯದಲ್ಲಿರುವ ಶಾಸನ (ಸೌ ಇ ಇ ಸಂ ೪)ರಲ್ಲಿ ವಿರೂಪಾಕ್ಷ ತೀರ್ಥ ವೆಂದಿದೆ. ವಿರೂಪಾಕ್ಷ ತೀರ್ಥ, ವಿರೂಪಾಕ್ಷ ಪಾದ, ವಿರೂಪಾಕ್ಷ ಪಟ್ಟಣ ಎಂಬುವು ಹಂಪೆಯ ಬೇರೆ ಬೇರೆ ಹೆಸರುಗಳು

ನಾಲ್ಕನೆಯ ಬಲ್ಲಾಳನ ಹೆಸರಿನಲ್ಲಿ ಹಂಪೆಯನ್ನು ರಾಜಧಾನಿಯಾಗಿ ಮಾಡಿ ಅದಕ್ಕೆ ಹೊಸಪಟ್ಟಣವೆಂಬ ಹೆಸರನ್ನು ಕೊಟ್ಟಿದ್ದ ದೊರೆ ಮುಮ್ಮಡಿ ಬಲ್ಲಾಳನು ತೀರಿಕೊಂಡಾಗ, ನಂತರ ಬಂದ ನಾಲ್ವಡಿ ಬಲ್ಲಾಳನು ೧೩೪೬ರ ವರೆಗೆ ಅಧಿಕಾರದಲ್ಲಿದ್ದವನು. ಈತನ ನಂತರ ಹರಿಹರನು ಪಟ್ಟಕ್ಕೆ ಬಂದನು. ಕ್ರಿ. ಶ. ೧೩೪೬ರ ಫೆಬ್ರವರಿ ತಿಂಗಳ ೧೩ನೇ ತಾರೀಖಿನಂದು ಹರಿಹರನು ತನ್ನ ವಿಜಯೋತ್ಸವವನ್ನಾಚರಿಸಲು ಶೃಂಗೇರಿಗೆ ಬಂದು ದಾನವಿಟ್ಟಿದ್ದಾನೆ. ಇವರ ಆಳ್ವಿಕೆಯ ಮೊದಲಿನ ಕೆಲವರುಷಗಳು ರಾಜಧಾನಿಗೆ ಹೊಸಪಟ್ಟಣ ಎಂದೇ ಕರೆಯುತ್ತಿದ್ದರು. ಈ ಎಲ್ಲಾ ಅಂಶಗಳಿಂದಾಗಿ ವಿಜಯನಗರ ಸಾಮ್ರಾಜ್ಯದ ಸ್ಥಾಪನೆಯು ಕ್ರಿ. ಶ. ೧೩೪೬ರಲ್ಲಿ ಪ್ರಾರಂಭವಾಗಿರಬಹುದೆಂದು ಹೇಳಬಹುದಾಗಿದೆ.

[ಈ ಶಾಸನವನ್ನು ಓದಲು ಮತ್ತು ಲೇಖನ ಸಿದ್ಧಪಡಿಸಲು ಸಹಾಯ ನೀಡಿದ ಡಾ॥ ದೇವರ ಕೊಂಡಾರೆಡ್ಡಿಯವರಿಗೆ ಚಿರಋಣಿಯಾಗಿದ್ದೇನೆ.]